RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೮<br>**Volume 148** | ಬೆಂಗಳೂರು, ಗುರುವಾರ, ಮಾರ್ಚ್ ೨೮, ೨೦೧೩ (ಚೈತ್ರ ೭, ಶಕ ವರ್ಷ ೧೯೩೪)<br>**Bangalore, Thursday, March 28, 2013 ( Chaithra 7, Shaka Varsha 1934)** | ಸಂಚಿಕೆ ೧೩<br>**Issue 13** |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಕೆ. ಶಿವಣ್ಣ ಸಿ.ಹೆಚ್.ಸಿ–259, ಕೆ.ಆರ್. ಪೇಟೆ ಪಟ್ಟಣ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(2)ಡಿಇ /06–2010–11 (ಓ.ಬಿ. ಸಂಖ್ಯೆ: 76/11–12) ದಿನಾಂಕ: 25–06–2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/25/2011–12 (ಓ.ಬಿ. ಸಂಖ್ಯೆ: 43/11–12) ದಿನಾಂಕ: 18–01–2012
3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 21–4–2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)8/ 2012–13 ದಿನಾಂಕ: 02–8–2012
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 126 ಸಿಎನ್‌ಎಸ್ 2012 ದಿನಾಂಕ: 16–11–2012

**ಪ್ರಸ್ತಾವನೆ:**

ಶ್ರೀ ಕೆ. ಶಿವಣ್ಣ ಸಿ.ಹೆಚ್.ಸಿ–259 ಇವರು ಮಂಡ್ಯ, ಜಿಲ್ಲೆಯ ನಾಗಮಂಗಲ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯ ನಿರ್ಲಕ್ಷತೆ ಮತ್ತು ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> "ಶ್ರೀ ಕೆ. ಶಿವಣ್ಣ ಸಿ.ಹೆಚ್.ಸಿ–259, ನಾಗಮಂಗಲ ಪೊಲೀಸ್ ಠಾಣೆ, ಆದ ನಿಮಗೆ ದಿನಾಂಕ: 30–04–2010 ರಂದು ಗ್ರಾಮಪಂಚಾಯ್ತಿ ಚುನಾವಣೆಯ ಸಂಬಂಧ ದೇವರ ಮಲ್ಲನಾಯಕನಹಳ್ಳಿ ಗ್ರಾಮದ ವ್ಯಾಪ್ತಿಯ ಗ್ರಾಮಗಳಿಗೆ ನೋಡಲ್ ಅಧಿಕಾರಿಯಾಗಿ ನೇಮಿಸಿದ್ದು, ನಿಮ್ಮ ವ್ಯಾಪ್ತಿಯ ಗ್ರಾಮಪಂಚಾಯ್ತಿಯಲ್ಲಿ ನಾಮಪತ್ರ ವಾಪಸ್ಸು ಪಡೆಯುವವರ ಬಗ್ಗೆ ಮಾಹಿತಿ ನೀಡಿರುವುದಿಲ್ಲಾ, ಈ ಬಗ್ಗೆ ದಿನಾಂಕ: 01–05–10 ರಂದು ಠಾಣಾಧಿಕಾರಿಗಳು ನಿಮಗೆ ಜ್ಞಾಪನ ನೀಡಿ ಸಮಜಾಯಿಸಿ ನೀಡುವಂತೆ ತಿಳಿಸಿದಾಗ ನೀವು ಏರು ಧ್ವನಿಯಲ್ಲಿ ಶರ್ಟಿನ ಗುಂಡಿಯನ್ನು ಬಿಚ್ಚಿಕೊಂಡು ಉದ್ಧಟತನದಿಂದ ಅವಾಚ್ಯಶಬ್ದಗಳಿಂದ ನಿಂದಿಸಿ ನಿಮಗೆ ನೇಮಕ ಮಾಡಿದ್ದ ಕರ್ತವ್ಯವನ್ನು ಮಾಡದೇ ಅತೀವ ನಿರ್ಲಕ್ಷತೆ ಮತ್ತು ದುರ್ನಡತೆ ತೋರಿರುತ್ತೀರಿ ಎಂತ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 25–06–2011ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಮೂರು ವಾರ್ಷಿಕ ವೇತನ ಬಡ್ತಿಯನ್ನು

ನಂತರದ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರುವಂತೆ ತಡೆಹಿಡಿಯಲಾಗಿದೆ. ದಿನಾಂಕ: 05–05–2010 ರಿಂದ 11–08–2010 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 18–01–2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶ: ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 42 ಪೊಸಿಅ 2012 ಬೆಂಗಳೂರು, ದಿನಾಂಕ: 04–12–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ. ಶಿವಣ್ಣ ಸಿ.ಹೆಚ್.ಸಿ–259, ಕೆ.ಆರ್. ಪೇಟೆ ಪಟ್ಟಣ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಅರ್ಜಿಯನ್ನು ಭಾಗಶಃ ಪುರಸ್ಕರಿಸಿ, ಶಿಸ್ತು ಪ್ರಾಧಿಕಾರವು ದಿನಾಂಕ: 25–6–2011ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಮಾರ್ಪಡಿಸಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ರಹಿತವಾಗಿ ಒಂದು ವರ್ಷದ ಅವಧಿಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**P.R. 284**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಸುಭಾಷ ಗಾಜರೆ, ಪಿ.ಎಸ್.ಐ., ಪೊಲೀಸ್ ತರಬೇತಿ ಕೇಂದ್ರ, ನಾಗನಹಳ್ಳಿ, ಗುಲ್ಬರ್ಗಾ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಇವಿ/9/ಈವ/2006 (ಆ.ಪು. ಸಂಖ್ಯೆ: 472/ಈವ/2008) ದಿನಾಂಕ: 30–8–2008
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು(6)/31/2008–09 (ಓ.ಬಿ. ಸಂಖ್ಯೆ: 43/2009–10) ದಿನಾಂಕ: 09–12–2009
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 04–8–2010
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)59/2010–11 ದಿನಾಂಕ: 04–01–2012

**ಪ್ರಸ್ತಾವನೆ:**

ಶ್ರೀ ಸುಭಾಷ ಗಾಜರೆ, ಹುಲಸೂರು ಪೊಲೀಸ್ ಠಾಣೆಯಲ್ಲಿ ಪೊಲೀಸ್ ಸಬ್–ಇನ್ಸ್‌ಪೆಕ್ಟರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯ ನಿರ್ಲಕ್ಷತೆಯ ಕಾರಣದ ಮೇಲೆ ಇತರೆ ಮೂವರು ಸಿಬ್ಬಂದಿಗಳೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರಡಿ 8 ರೊಂದಿಗೆ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

**ಶ್ರೀ ಸುಭಾಷ ಗಾಜರೆ, ಪಿ.ಎಸ್.ಐ. ಹುಲಸೂರ ಠಾಣೆ.**

ಅ) ದಿನಾಂಕ: 04–5–2006 ರಂದು ಮಧ್ಯಾಹ್ನ ಸುಮಾರು 13.30 ಗಂಟೆಗೆ ಮೇಹಕರ್ ಉಕ್ಕಡ ಪೊಲೀಸ್ ಠಾಣೆಗೆ ಭೇಟಿ ನೀಡಿದ್ದಾಗ ಎತ್ತುಗಳು ಕಳವು ಮಾಡಿದ ಎನ್ನಲಾದ 3 ಜನ ಆರೋಪಿತರಾದ ಶಂಕರ ಗಂದಗೆ ಸಾ: ಅಳವಾಯಿ ಗ್ರಾಮ, ರಾಮ ತಂದೆ ಮಾಣಿಕರಾವ ಪುಲೇ ಸಾ: ಹರಿವಾಡಿ ಗ್ರಾಮ ಮತ್ತು ಭರತ ತಂದೆ ರಗುರಾಮ ಗಾಯಕವಾಡ ರವರನ್ನು ದಸ್ತಗಿರಿ ಮಾಡಿಕೊಂಡು 13.50 ಗಂಟೆಗೆ ಪೊಲೀಸ್ ಠಾಣೆಯ ಹೊರಗಡೆ ಜೀಪು ನಿಲ್ಲಿಸಿ ಸದರಿ 3 ಜನ ಆರೋಪಿತರನ್ನು ಸರಿಯಾಗಿ ಅಂಗ ಜಡತಿ ಮಾಡಿ ದಸ್ತಗಿರಿ ನಿಯಮಾವಳಿಯನ್ನು ಅನುಸರಿಸಿ ಸಂಬಂಧಿಸಿದ ದಾಖಲಾತಿಗಳಲ್ಲಿ ಎಂಟ್ರಿ ಹಾಕಿ ಸದರಿ ಆರೋಪಿತರನ್ನು ಎಸ್.ಹೆಚ್.ಓ. ಕರ್ತವ್ಯದ ಮೇಲಿದ್ದ ಅರ್ಜುನ ಸಿ.ಹೆಚ್.ಸಿ.–533 ಮತ್ತು ಸೇಂಟ್ರಿ ಕರ್ತವ್ಯದ ಮೇಲಿದ್ದ ವಿಜಯ ಶೇಖರ ಸಿ.ಪಿ.ಸಿ.–848 ರವರ ತಾಬೇಗೆ ಸರಿಯಾಗಿ ವಹಿಸಿಕೊಟ್ಟು ತಿಳುವಳಿಕೆ ನೀಡದೆ ಹಾಗೂ ಪೊಲೀಸ್ ಠಾಣೆಯಲ್ಲಿ ಇವರು ಲಾಕಪದಲ್ಲಿಡಲು ಸೂಕ್ತ ಸುವ್ಯವಸ್ಥೆ ಹಾಗೂ ಹೆಚ್ಚಿನ ಬೆಂಗಾವಲು ಕರ್ತವ್ಯ ಸಿಬ್ಬಂದಿ ನಿಯಮಿಸದೆ ತರಾತುರಿಯಲ್ಲಿ ಎಸ್.ಹೆಚ್.ಓ. ಮತ್ತು ಸೇಂಟ್ರಿ ಕರ್ತವ್ಯದ ಸಿಬ್ಬಂದಿಯವರಿಗೆ ಒಪ್ಪಿಸಿ ಹೋಗಿ ಕರ್ತವ್ಯದಲ್ಲಿ ನಿರ್ಲಕ್ಷ್ಯತನ ತೋರಿಸಿರುತ್ತೀರಿ.

ಬ) ನೀವು ಒಬ್ಬ ಜವಾಬ್ದಾರಿಯುತ ಪಿ.ಎಸ್.ಐ. ಹುದ್ದೆಯ ಪೊಲೀಸ್ ಅಧಿಕಾರಿಯಾಗಿದ್ದು ಪೊಲೀಸ್ ಠಾಣೆಯ ಕಟ್ಟಡ ಒಳಗಡೆ ಹಾಗೂ ಹೊರಗಡೆ ಅಂದರೆ ಪೊಲೀಸ್ ಠಾಣೆಯ ಬಂಧಿಖಾನೆಯಲ್ಲಿ ಹಾಗೂ ಶೌಚಾಲಯದಲ್ಲಿ ಆತ್ಮಹತ್ಯ ಮಾಡಿಕೊಳ್ಳುವ ಉಪಯೋಗಿಸುವ ವಸ್ತುಗಳನ್ನು ಇದ್ದ ಬಗ್ಗೆ ಸರಿಯಾಗಿ ಗಮನ ಹರಿಸದೆ ಇರುವುದರಿಂದ ಒಂದು ಮಫಲರ್ ಸಹಾಯದಿಂದ ಆರೋಪಿ ಮೂರು ಜನರ ಪೈಕಿ ಒಬ್ಬ ಶಂಕರ ಎಂಬ ವ್ಯಕ್ತಿ ನೇಣು ಹಾಕಿಕೊಳ್ಳಲು ಆತ್ಮಹತ್ಯ ಮಾಡಿಕೊಳ್ಳಲು ಅವಕಾಶ ಮಾಡಿಕೊಟ್ಟಿದ್ದು ಇದೆ.

ಕ) ಈ ಪ್ರಕರಣವನ್ನು ಮುಂಚಿತವಾಗಿ ದಾಖಲು ಮಾಡದೆ ಸದರಿ ಮೂರು ಜನರನ್ನು ದಸ್ತಗಿರಿ ಮಾಡಿ ಕಾನೂನಿನ ಅನ್ವಯ ವಿಧಿಬದ್ದ ತನಿಖಾ ನಿಯಮಾವಳಿಗಳನ್ನು ಅನುಸರಿಸದೇ ಇರುವುದರಿಂದ ಸದರಿ ಶಂಕರ ಗಂದಗೆ ಪೊಲೀಸ್ ಠಾಣೆಯಲ್ಲಿ ಅತ್ಮಹತ್ಯೆ ಮಾಡಿಕೊಳ್ಳಲು ಅನುವು ಮಾಡಿಕೊಟ್ಟು ಕರ್ತವ್ಯ ನಿರ್ವಹಣೆಯಲ್ಲಿ ವಿಫಲರಾಗಿರುವಿರಿ.

ಮೇಲ್ಕಂಡ ಆರೋಪದ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 30–8–08ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಶಿಸ್ತು ಪ್ರಾಧಿಕಾರದ ಆದೇಶವನ್ನು ಭಾಗಶಃ ಮಾರ್ಪಡಿಸಿ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 09–12–2009ರ ಆದೇಶದಲ್ಲಿ ಇವರನ್ನು ಪುನ: ಕರ್ತವ್ಯಕ್ಕೆ ನೇಮಿಸಲಾಗಿದೆ. ಪಿ.ಎಸ್.ಐ. ಹುದ್ದೆಯ ವೇತನ ಶ್ರೇಣಿ ರೂ. 10,000–18,150ರಲ್ಲಿ ರೂ. 10.000ಕ್ಕೆ ನಿಗದಿಪಡಿಸಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ದಿನಾಂಕದಿಂದ ಕನಿಷ್ಠ ವೇತನ ಶ್ರೇಣಿಗೆ 6 ತಿಂಗಳ ಅವಧಿಗೆ ಸಂಚಿತ ಪರಿಣಾಮ ರಹಿತವಾಗಿ ಜಾರಿಗೆ ಬರುವಂತೆ ಕೆಳಗಿಳಿಸಲಾಗಿದೆ. ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ, ವಜಾಗೊಂಡ ದಿನಾಂಕದಿಂದ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ದಿನಾಂಕದವರೆಗಿನ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿಯೆಂದು ಪರಿಗಣಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ನಿರ್ಲಕ್ಷತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 146 ಪೊಸಿಅ 2010 ಬೆಂಗಳೂರು, ದಿನಾಂಕ: 07–11–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸುಭಾಷ ಗಾಜರೆ, ಪಿ.ಎಸ್.ಐ., ಪೊಲೀಸ್ ತರಬೇತಿ ಕೇಂದ್ರ, ನಾಗನಹಳ್ಳಿ, ಗುಲ್ಬರ್ಗಾ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**P.R. 288**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ವಿ.ಟಿ. ಮಂಜೇಗೌಡ, ಸಿ.ಪಿ.ಸಿ.–428, ನಾಗಮಂಗಲ ಪೊಲೀಸ್ ಠಾಣೆ ಇವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಇವಿ/62/2008–09 (ಓ.ಬಿ. ಸಂಖ್ಯೆ: 23/2009–10) ದಿನಾಂಕ: 05–02–2010
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು(4)/82/2011–12 ದಿನಾಂಕ: 15–02–2012
3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 23–02–2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/82/2011–12 ದಿನಾಂಕ: 16–6–2012
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 124 ಸಿಎನ್‌ಎಸ್ 2012 ದಿನಾಂಕ: 16–11–2012

**ಪ್ರಸ್ತಾವನೆ:**

ಶ್ರೀ ವಿ.ಟಿ. ಮಂಜೇಗೌಡ, ಸಿ.ಪಿ.ಸಿ., ಇವರು ನಾಗಮಂಗಲ ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಬೇಜವಾಬ್ದಾರಿತನ ಹಾಗೂ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇತರೇ ಇನ್ನಿಬ್ಬರು ಸಿಬ್ಬಂದಿಗಳೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ಹಾಗೂ 8 ರನ್ವಯ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

1) ಶ್ರೀ ವಿ.ಟಿ. ಮಂಜೇಗೌಡ, ಸಿ.ಪಿ.ಸಿ.–428, ನಾಗಮಂಗಲ ಪಟ್ಟಣ ಠಾಣೆ ಆದ ನೀವು, ದಿನಾಂಕ: 21–12–2008 ರಂದು ಸಂಜೆ ನಾಗಮಂಗಲ ಟೌನ್ ಮೈಸೂರು ರಸ್ತೆಯಲ್ಲಿರುವ ರಿಜ್ವಾನ್ ಎಂಬುವರ ಗುಜರಿ ಅಂಗಡಿಯ ಪಕ್ಕದಲ್ಲಿ ಗಲಾಟೆ ಮಾಡಿಕೊಳ್ಳುತ್ತಿದ್ದ ಹುಡುಗರ ವಿರುದ್ಧ ಕ್ರಮ ಕೈಗೊಳ್ಳದೆ, ಅಲ್ಲಿ ನಿಂತಿದ್ದ ಮುದಾಸೀರ್ ಎಂಬ ಯುವಕನಿಗೆ ಅವಾಚ್ಯ ಶಬ್ದಗಳಿಂದ ಬೈಯ್ದು, ಲಾಠಿಯಿಂದ ತಲೆಗೆ ಹೊಡೆದ ಪರಿಣಾಮ, ಉದ್ರಿಕ್ತ ಪರಿಸ್ಥಿತಿ ನಿರ್ಮಾಣವಾಗಿ ಆತನ ಕಡೆಯವರು ಗುಂಪುಗೂಡಿ ನಿಮ್ಮ ವಿರುದ್ಧ ಕ್ರಮ ಕೈಗೊಳ್ಳುವಂತೆ ಧರಣಿ ನಡೆಸಿದ್ದು, ಇದಕ್ಕೆ ಪ್ರತಿಯಾಗಿ ಮತ್ತೊಂದು ಗುಂಪು ಪ್ರತಿಭಟನೆ ನಡೆಸಿ, ನಂತರ ಎರಡು ಗುಂಪುಗಳ ನಡುವೆ ಕಲ್ಲು ತೂರಾಟ, ನಡೆದು, ಹಲವು ಅಂಗಡಿಗಳಿಗೆ ಬೆಂಕಿ ಹಾಕಿ ಹಾನಿ ಮಾಡಿದ್ದು, ಇದರಿಂದ ನಾಗಮಂಗಲ ಪಟ್ಟಣದಲ್ಲಿ ಪ್ರಕ್ಷುಬ್ದ ವಾತಾವರಣ ನಿರ್ಮಾಣಗೊಂಡಿರುತ್ತದೆ. ನೀವು ಸೌಜನ್ಯದಿಂದ ವರ್ತಿಸಿ, ಮುದಾಸೀರ್ ಎಂಬ ಯುವಕನಿಗೆ ವಿನಾ ಕಾರಣ ಹೊಡೆಯದಿದ್ದಲ್ಲಿ ಈ ಘಟನೆ ಸಂಭವಿಸುತ್ತಿರಲಿಲ್ಲ. ನೀವು ಬೇಜವಾಬ್ದಾರಿ, ಉದ್ದಟತನ, ಅನುಚಿತ ವರ್ತನೆ ಪ್ರದರ್ಶಿಸಿರುತ್ತೀರಿ.

2) ನಂತರದ ಅದೇ ದಿನ ರಾತ್ರಿ 11.00 ಗಂಟೆ ಸಮಯದಲ್ಲಿ ಮಂಜೇಗೌಡ, ಪಿ.ಸಿ. 428, ಶಂಕರ ರೆಡ್ಡಿ, ಪಿ.ಸಿ. 463, ಎಂ. ಕೃಷ್ಣಮೂರ್ತಿ ಪಿ.ಸಿ. 360, ಆದ ನೀವುಗಳು ಬಂದೋಬಸ್ತ್‌ಗೆ ಬಂದಿದ್ದ ಸಿಬ್ಬಂದಿಗಳೊಂದಿಗೆ ನಾಗಮಂಗಲ ಪಟ್ಟಣದ ಮುಸ್ಲಿಂ ಜನಾಂಗದವರಿಗೆ ಸೇರಿದ ವಾಹನಗಳ ಗಾಜುಗಳನ್ನು ಒಡೆದುಹಾಕಿರುತ್ತೀರಿ.

ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನೀವುಗಳು, ಗಲಾಟೆ, ಘರ್ಷಣೆ, ಗಲಭೆಗಳು ನಡೆಯದಂತೆ ತಡೆಗಟ್ಟಿ, ಸಾರ್ವಜನಿಕರ ಆಸ್ತಿಪಾಸ್ತಿಗೆ ಹಾನಿಯಾಗದಂತೆ ಕ್ರಮ ಕೈಗೊಳ್ಳಬೇಕಾದ ನೀವೇ ಪರಿಸ್ಥಿತಿ ಉದ್ರಿಕ್ತಗೊಂಡು ಗಲಭೆ ಸಂಭವಿಸಿ, ಎರಡು ಗುಂಪುಗಳ ನಡುವೆ ಘರ್ಷಣೆ ಸಂಭವಿಸಲು ಹಾಗೂ ಅಪಾರ ಪ್ರಮಾಣದ ಸಾರ್ವಜನಿಕರ ಆಸ್ತಿ ನಷ್ಟ ಉಂಟಾಗಲು ಕಾರಣಕರ್ತರಾಗಿ, ಕರ್ತವ್ಯದಲ್ಲಿ ಬೇಜವಾಬ್ದಾರಿ ಉದ್ದಟತನದಿಂದ ವರ್ತಿಸಿ, ಇಲಾಖೆಗೆ ಕಳಂಕ ತರುವಂತ ರೀತಿಯಲ್ಲಿ ನಡೆದುಕೊಂಡು ದುರ್ನಡತೆ ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 05–02–2010ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರುವಂತೆ ಒಂದು ವರ್ಷ ಕಾಲ ಮುಂದೂಡಲಾಗಿದೆ. ದಿನಾಂಕ: 11–02–2009 ರಿಂದ 21–4–09ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 15–02–2012ರ ಹಿಂಬರದಲ್ಲಿ ಇವರು ಕಾಲವಿಳಂಬವಾಗಿ ಮೇಲ್ಮನವಿ ಸಲ್ಲಿಸಿದ ಕಾರಣ ಮೇಲ್ಮನವಿಯನ್ನು ಪರಿಗಣಿಸಲು ನಿಯಮಗಳಲ್ಲಿ ಆಸ್ಪದವಿಲ್ಲವೆಂದು ಹಿಂಬರಹವನ್ನು ನೀಡಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ದಿನಾಂಕ: 05–02–2010ರ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶ: ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 30 ಪೊಸಿಅ 2012 ಬೆಂಗಳೂರು, ದಿನಾಂಕ: 27–11–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿ.ಟಿ. ಮಂಜೇಗೌಡ, ಸಿ.ಪಿ.ಸಿ.–428, ನಾಗಮಂಗಲ ಪೊಲೀಸ್ ಠಾಣೆ, ಇವರಿಗೆ ಶಿಸ್ತು ಪ್ರಾಧಿಕಾರದ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶ: ಮಾರ್ಪಡಿಸಿ, ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ (without cummulative effect) ಆರು ತಿಂಗಳ ಅವಧಿಗೆ ಮುಂದೂಡುವ ದಂಡನೆಯನ್ನು ವಿಧಿಸಿ, ದಿನಾಂಕ: 11–02–2009 ರಿಂದ 21–4–2009ರ ವರೆಗೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**P.R. 290**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:–** ಗುಬ್ಬಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ರೂ.2242.00 ಲಕ್ಷಗಳಲ್ಲಿ ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:–** 1. ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: ಕಜಮಂ: ಮುಅ/ಆಶ್ರೇಕಾಅ–1/ತಾ.ಸ–8/ಸಅ–5/ಗುಬ್ಬಿ–ಒ.ಚ.ಯೋ/2063, 2010–11 ದಿನಾಂಕ: 30–09–2011.

**ಪ್ರಸ್ತಾವನೆ :–**

ಗುಬ್ಬಿ ಪಟ್ಟಣವು ತುಮಕೂರು ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, 2001ರ ಜನಗಣತಿಯಂತೆ ಪಟ್ಟಣದ ಜನಸಂಖ್ಯೆಯು 16,805 ಇದ್ದು ಪ್ರಸ್ತುತ ಜನಸಂಖ್ಯೆ 18,000 ಇರುತ್ತದೆ. ಈ ಪಟ್ಟಣದ ಜನಸಂಖ್ಯೆಯು 2027ರಲ್ಲಿ 25,765 ಮತ್ತು 2042ರಲ್ಲಿ 32,676 ಆಗಬಹುದೆಂದು ಅಂದಾಜಿಸಬಹುದಾಗಿದೆ. ಹಾಲಿ ಈ ಪಟ್ಟಣಕ್ಕೆ ಹೇಮಾವತಿ ನಾಲೆಯಿಂದ ನೀರು ಪಡೆದು ಹೆರೂರು ಕೆರೆಯಲ್ಲಿ ಸಂಗ್ರಹಿಸಿ 2004ರಲ್ಲಿ ಚಾಲನೆಗೊಳಿಸಲಾಗಿದೆ. ಪ್ರಸ್ತುತ ಸದರಿ ಯೋಜನೆಯಿಂದ 2.27 ದಶಲಕ್ಷ ಲೀಟರ್ ನೀರನ್ನು ಒದಗಿಸಲು ವಿನ್ಯಾಸಿಸಲಾಗಿದೆ. ಇದಲ್ಲದೆ, ಪಟ್ಟಣದಲ್ಲಿ ವಿದ್ಯುತ್ ಯಂತ್ರ ಅಳವಡಿಸಿರುವ 18 ಸಂಖ್ಯೆ ಕೊಳವೆ ಬಾವಿಗಳಿಂದ 0.05 ಎಂ.ಎಲ್.ಡಿ ನೀರನ್ನು ಸರಬರಾಜು ಮಾಡಲಾಗುತ್ತಿದ್ದು, ತಲಾ ದಿನಂಪ್ರತಿ 100 ಲೀಟರ್‌ನಂತೆ ನೀರು ಸರಬರಾಜು ಮಾಡಲು ವಿನ್ಯಾಸಿಸಿ, ಚಾಲ್ತಿಗೊಳಿಸಲಾಗಿದೆ. ಪ್ರಸ್ತುತ ಪಟ್ಟಣ ಪಂಚಾಯತಿ ವತಿಯಿಂದ ನೀರು ಸರಬರಾಜು ನಿರ್ವಹಿಸಲಾಗುತ್ತಿದೆ. ಅವಲಂಬಿತ ಮೇಲ್ಮೈನೀರಿನ ಮೂಲದ ಲಭ್ಯತೆ ಇರುವುದರಿಂದ, ಪಟ್ಟಣದ ನೀರು ಸರಬರಾಜು ವ್ಯವಸ್ಥೆಯನ್ನು ಅವಶ್ಯಕತೆಗೆ ತಕ್ಕಂತೆ ಅಭಿವೃದ್ಧಿಪಡಿಸಬಹುದಾಗಿದೆ.

ಈ ಪಟ್ಟಣಕ್ಕೆ ಪ್ರಸ್ತುತ ಒಳಚರಂಡಿ ವ್ಯವಸ್ಥೆ ಇರುವುದಿಲ್ಲ. ಹೆಚ್ಚಿನ ಮನೆಯವರು ಸೋಕ್ ಪಿಟ್ ವ್ಯವಸ್ಥೆ ಮಾಡಿಕೊಂಡಿರುತ್ತಾರೆ ಮತ್ತು ಕೆಲವು ಪ್ರದೇಶಗಳಲ್ಲಿ ಮಲೀನ ನೀರನ್ನು ತೆರೆದ ಚರಂಡಿಗೆ ಹರಿಯಲು ಬಿಡುತ್ತಿದ್ದು, ಇದರಿಂದ ಮೇಲ್ಮೈ ಜಲಮೂಲ ಹಾಗೂ ಅಂತರ್ ಜಲ ನೀರು ಕಲುಷಿತಗೊಳ್ಳುತ್ತಿದ್ದು ಸಾರ್ವಜನಿಕರ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟಾಗುತ್ತಿದೆ. ಆದ್ದರಿಂದ ಶಾಶ್ವತ ಪರಿಹಾರಕ್ಕಾಗಿ ಈ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವುದು ಅವಶ್ಯವಾಗಿರುತ್ತದೆ. ಅದರಂತೆ 2042ರಲ್ಲಿ ಅಂದಾಜಿಸಲಾದ ಜನಸಂಖ್ಯೆಗೆ ತಲಾದಿನಂಪ್ರತಿ 135 ಲೀಟರ್ ನೀರು ಪರಿಗಣಿಸಿ, ಇದರ ಶೇಕಡ 80 ಅಂದರೆ ತಲಾದಿನಂಪ್ರತಿ 110 ಲೀಟರ್ ಗ್ರಾಮಸಾರವೆಂದು ಪರಿಗಣಿಸಿ, ಯೋಜನೆಯನ್ನು ರೂಪಿಸಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ರವರು ಯೋಜನೆಯ ಆರ್ಥಿಕ ಮಾದರಿಯನ್ನು ಈ ಕೆಳಕಂಡ ಆರ್ಥಿಕ ಮಾದರಿಯಂತೆ ಆಡಳಿತಾತ್ಮಕ ಅನುಮೋದನೆಯನ್ನು ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | |
|---|---|
| ಕರ್ನಾಟಕ ಸರ್ಕಾರದ ಅನುದಾನ (95%) | ರೂ. 2129.90 ಲಕ್ಷಗಳು |
| ಸ್ಥಳೀಯ ಸಂಸ್ಥೆಯ ಕೊಡುಗೆ (05%) | ರೂ. 112.10 ಲಕ್ಷಗಳು |
| **ಒಟ್ಟು** | **ರೂ. 2242.00 ಲಕ್ಷಗಳು** |

ಈ ಯೋಜನೆಯನ್ನು ಮಂಡಳಿಯ 2011–12ನೇ ಸಾಲಿನ ಅನುಮೋದಿತ ಕ್ರಿಯಾಯೋಜನೆಯಲ್ಲಿ ಸೇರಿಸಿ ರೂ. 748.00ಲಕ್ಷಗಳನ್ನು ಅನುವು ಮಾಡಲಾಗಿದೆ.

ಯೋಜನೆಯ ಮೂಲ ಅಂದಾಜು ಮೊತ್ತವಾದ ರೂ.1703.90 ಲಕ್ಷಗಳಿಗೆ ಶೇಕಡ 5ರಂತೆ ಇಟಿಪಿ ಮತ್ತು ಸಾದಿಲ್ವಾರು ವೆಚ್ಚಗಳಾದ ರೂ. 85.20 ಲಕ್ಷಗಳನ್ನು ಮತ್ತು ಇತರೆ ವೆಚ್ಚಗಳಾದ ರೂ.0.40 ಲಕ್ಷಗಳು ಮತ್ತು ಇತರೆ ಠೇವಣಿಗಳಿಗೆ ರೂ.5.00 ಲಕ್ಷಗಳು ಸೇರಿ ಯೋಜನೆಯ ಅಂದಾಜನ್ನು ರೂ.1794.50 ಲಕ್ಷಗಳಿಗೆ ಮಿತಿಗೊಳಿಸಲಾಗಿರುತ್ತದೆ. ಇದಲ್ಲದೆ ಯೋಜನೆಯ ಅಂದಾಜಿನಲ್ಲಿ ಸೇರಿಸಿರುವ ಏಸ್ಕಲೇಷನ್ ದರಗಳನ್ನು, ದರಗಳ ಹೊಂದಾಣಿಕೆ ಹಾಗೂ ಭೂ ಸ್ವಾಧೀನಕ್ಕೆ ನಿಗದಿಪಡಿಸಿರುವ ಮೊತ್ತಗಳನ್ನು ಸ್ಥಳೀಯ ಸಂಸ್ಥೆಯೇ ಭರಿಸಲು ಒಪ್ಪಿರುವ ಹಿನ್ನಲೆಯಲ್ಲಿ ಸದರಿ ಮೊತ್ತವನ್ನು ಅಂದಾಜು ಪಟ್ಟಿಯಿಂದ ಹೊರತುಪಡಿಸಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 19ಯುಡಿಎಸ್ 2012 ಬೆಂಗಳೂರು, ದಿನಾಂಕ: 25–08–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಬ್ಬಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ರೂ.1794.50 ಲಕ್ಷಗಳಲ್ಲಿ (ರೂ.ಒಂದು ಸಾವಿರದ ಏಳುನೂರ ತೊಂಭತ್ತಾ ನಾಲ್ಕು ಲಕ್ಷ ಐವತ್ತು ಸಾವಿರ ಮಾತ್ರ) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. Since escalation and tender premium is to be met from ULB contribution, providing it separately in the project estimate is not right. This component is reduced to such extent in the estimate.
2. The board shall invite the tender immediately after the handing over of the land required if any under the scheme in order to avoid time and cost run over.
3. Board should adopt proper technology for waste water treatment which requires less energy and less maintenance cost as Gubbi being small ULB shall find it difficult to mobilize large resource for its operations.
4. Adequate provision to be made by the Board in the following years for timely completion of the Project;
5. Board should ensure about the financial feasibility and start this new project by providing adequate budgetary grants;

6. Water rates as proposed by KUWS & DB have to be implemented to meet O & M cost of UG;
7. KTPP provisions, quality control and timely completion should be ensured;
8. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದಲ್ಲ;
9. ಸದರಿ ಕಾಮಗಾರಿಯನ್ನು ನಿಗದಿತ ಅವದಿಯ ಒಳಗೆ ಪೂರ್ಣಗೊಳಿಸುವುದು;

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 51 Exp-9:2012, ದಿನಾಂಕ:27–06–2012 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ.ವಾಸುದೇವರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**P.R. 141**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:–** ಶ್ರೀ ರೇಣುಕಾ ಯಲ್ಲಮ್ಮಗುಡ್ಡ ದೇವಸ್ಥಾನದ ನೀರಿನ ಬಿಲ್ಲಿನ ಬಾಕಿ ಹಣದ ಮೇಲಿನ ಬಡ್ಡಿ ಮನ್ನಾ ಮಾಡುವ ಕುರಿತು.

**ಓದಲಾಗಿದೆ:–** 1. ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ ರವರ ಪತ್ರ ಸಂಖ್ಯೆ: ಕಜಮಂ/ವ್ಯನಿ/ಮುಅ (ಉ)/ಆಶ್ರೇಕಾಅ(ಗು) ಉಮುಅ–2/ಸಅ–4/3293/2011–12, ದಿನಾಂಕ: 06–01–2012.

2. ಸರ್ಕಾರದ ಆದೇಶ ಸಂಖ್ಯೆ:ನಅಇ 57 ಎಹೆಚ್‌ಡಿ 2011 ದಿನಾಂಕ: 05–10–2012.

ಆಯುಕ್ತರು ಧಾರ್ಮಿಕ ದತ್ತಿ ಬೆಂಗಳೂರು ರವರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಶ್ರೀ ರೇಣುಕಾ ಯಲ್ಲಮ್ಮ ದೇವಸ್ಥಾನಕ್ಕೆ ಪಡೆದುಕೊಂಡ ನೀರಿನ ಬಾಕಿ ಬಿಲ್ಲನ್ನು ಸಂದಾಯ ಮಾಡಿದ್ದು, ಬಡ್ಡಿ ಹಣ ಮನ್ನಾ ಮಾಡುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಗೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿರವರು ಮೇಲೆ ಓದಲಾದ ಉಲ್ಲೇಖ (1)ರ ಪತ್ರದಲ್ಲಿ ಬಡ್ಡಿ ಮನ್ನಾ ಮಾಡುವ ಪ್ರಸ್ತಾವನೆಯನ್ನು ಸರ್ಕಾರದ ಅನುಮೋದನೆಗೆ ಸಲ್ಲಿಸಿರುತ್ತಾರೆ

ಮೇಲೆ ಓದಲಾದ ಕ್ರಮಾಂಕ (2) ರ ಆದೇಶದಲ್ಲಿ ಸರ್ಕಾರವು ಹುಬ್ಬಳ್ಳಿ–ಧಾರವಾಡ, ಮೈಸೂರು ಮತ್ತು ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ವಸೂಲಿಗಾಗಿ ಬಾಕಿ ಇರುವ ನೀರಿನ ಕರದ ಮೇಲಿನ ದಂಡ ರೂಪದ ಬಡ್ಡಿಯನ್ನು ಮನ್ನಾ ಮಾಡಲು ಈ ಹಿಂದೆ ಹೊರಡಿಸಿದ್ದ, ಆದೇಶ ಸಂಖ್ಯೆ:ನಅಇ 160 ಎಸಿಬಿ 2010, ದಿನಾಂಕ:14–01–2011 ರಲ್ಲಿ ಒಂದಾವರ್ತಿ ತೀರುವಳಿ ಎಂದು ಪರಿಗಣಿಸಿ ನೀರಿನ ಕರವನ್ನು ನಿಗಧಿತ ಅವಧಿಯೊಳಗೆ ಅಸಲು ಮೊತ್ತವನ್ನು ಪಾವತಿಸಿದ್ದಲ್ಲಿ ದಂಡ ರೂಪದ ಬಡ್ಡಿ ಮೊತ್ತವನ್ನು ಕೆಲವು ಷರತ್ತುಗಳಿಗೊಳಪಡಿಸಿ ದಿನಾಂಕ:01–03–2011 ರ ವರೆಗೆ ಮನ್ನಾ ಮಾಡಲು ಅನುಮೋದನೆ ನೀಡಿ ಆದೇಶ ಹೊರಿಡಿಸಿದ್ದನ್ನು ದಿನಾಂಕ:31–12–2012 ರವರೆಗೆ ವಿಸ್ತರಿಸಿ ಆದೇಶ ಹೊರಡಿಸಿರುತ್ತದೆ.

ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ರೇಣುಕಾ ಯಲ್ಲಮ್ಮ ಗುಡ್ಡದ ದೇವಸ್ಥಾನದ ನೀರಿನ ಕರದ ಬಾಕಿಯನ್ನು ವಿಳಂಬವಾಗಿ ಪಾವತಿಸಿದ ಮೊತ್ತಕ್ಕೆ ಶೇ:12ರಷ್ಟು ಬಡ್ಡಿಯನ್ನು ಆಕರಿಸಲು ಅವಕಾಶವಿದ್ದು, ಅದರಂತೆ ಮಂಡಳಿಯು ದಿನಾಂಕ:19–01–1984 ರಿಂದ ದಿನಾಂಕ: 31–08–2004 ರವರೆಗೆ ನಿರಂತರವಾಗಿ ನೀರು ಪೂರೈಕೆ ಮಾಡಿದ್ದು, ದಿನಾಂಕ:01–09–2004 ರಿಂದ ನೀರು ಪೂರೈಕೆಯನ್ನು ಖಾಯಂ ಆಗಿ ನಿಲ್ಲಿಸಲಾಗಿದೆ. ಅಂದಿನವರೆಗೆ ಒಟ್ಟು ನೀರಿನ ಕರದ ಬಾಕಿ ರೂ.1,31,92,913 ಇದ್ದು, ಸದರಿ ಮೊತ್ತವು ದಿನಾಂಕ:31–08–2011 ರವರೆಗೆ ರೂ.2,02,20,202 ಹೆಚ್ಚಿರುತ್ತದೆ. ಆದರೆ ಅಸಲು ಮಾತ್ರ ರೂ.1,57,683 ಆಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (3) ರ ಆದೇಶದಲ್ಲಿ ನೀರಿನ ಕರದ ಬಾಕಿ ಅಸಲು ಮೊತ್ತವನ್ನು ಪಾವತಿಸಿದ್ದಲ್ಲಿ, ದಂಡ ರೂಪದ ಬಡ್ಡಿಯನ್ನು ಪಾವತಿಸುವುದರಿಂದ ವಿನಾಯಿತಿ ನೀಡಲು ಇರುವ ಸೌಲಭ್ಯವನ್ನು ಶ್ರೀ ರೇಣುಕಾ ಯಲ್ಲಮ್ಮ ದೇವಸ್ಥಾನಕ್ಕೆ ವಿಸ್ತರಿಸುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 56 ಯುಎಂಎಸ್ 2011 ಬೆಂಗಳೂರು, ದಿನಾಂಕ: 30–10–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ರೇಣುಕಾ ಯಲ್ಲಮ್ಮ ದೇವಸ್ಥಾನದ ಆಡಳಿತ ಮಂಡಳಿಯು ಅಸಲು ಮೊತ್ತವನ್ನು ದಿನಾಂಕ: 31–12–2012 ರ ಒಳಗಾಗಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಪಾವತಿಸುವ ಷರತ್ತಿಗೊಳಪಡಿಸಿ ನೀರಿನ ಬಿಲ್ಲಿನ ಬಾಕಿ ಹಣದ ಮೇಲಿನ ಬಡ್ಡಿಯನ್ನು ಪಾವತಿಸಿರುವುದರಿಂದ ವಿನಾಯಿತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ.ವಾಸುದೇವರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**P.R. 142**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:–** ಹುಬ್ಬಳ್ಳಿ ಧಾರವಾಡ ಅವಳಿ ನಗರಗಳ ಒಟ್ಟು 5 ಪೂರ್ಣ, 12 ಭಾಗಶಃ ವಾರ್ಡ್‌ಗಳಿಗೆ 24/7 ನಿರಂತರ ನೀರು ಸರಬರಾಜು ಯೋಜನೆಯ ವ್ಯವಸ್ಥೆಯನ್ನು ಅಂದಾಜು ರೂ. 7100.00 ಲಕ್ಷಗಳಲ್ಲಿ ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:–** ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ ಬೆಂಗಳೂರು ರವರ ಪತ್ರ ಸಂಖ್ಯೆ: ಕಜಮಂ/ವ್ಯನಿ/ಮುಅ (ಉ)/ಅಅ(ಬೆ)ಉಮುಅ–ಸಅ–2/2010–11/3555/ದಿನಾಂಕ: 11–01–2011.

**ಪ್ರಸ್ತಾವನೆ:–**

ಹುಬ್ಬಳ್ಳಿ–ಧಾರವಾಡ ಅವಳಿ ನಗರಗಳು ಕರ್ನಾಟಕ ರಾಜ್ಯದ 2ನೇಯ ಅತಿ ದೊಡ್ಡ ನಗರವಾಗಿದ್ದು, ಹುಬ್ಬಳ್ಳಿ ಧಾರವಾಡ, ಕುಂದಗೋಳ ಮತ್ತು ಮಾರ್ಗ ಮಧ್ಯದ ಹಳ್ಳಿಗಳ ಜನಸಂಖ್ಯೆಯ ವಿವರಗಳು ಈ ಕೆಳಕಂಡಂತಿರುತ್ತದೆ.

| ಕ್ರಮ ಸಂಖ್ಯೆ | ವರ್ಷ | ಜನಸಂಖ್ಯೆ | | | ನೀರಿನ ಒಟ್ಟು ಬೇಡಿಕೆ (ಎಂಎಲ್‌ಡಿ) | ಪ್ರಸ್ತುತ ನೀರು ಸರಬರಾಜು (ಎಂಎಲ್‌ಡಿ) |
|---|---|---|---|---|---|---|
| | | ಹುಬ್ಬಳ್ಳಿ ಧಾರವಾಡ | ಕುಂದಗೋಳ ಪಟ್ಟಣ | ಮಾರ್ಗ ಮಧ್ಯದ ಹಳ್ಳಿಗಳು | | |
| 1 | 2011 | 989158 | 20542 | 91096 | 1 | 2011 |
| 2 | 2026 | 1332925 | 27682 | 109444 | 2 | 2026 |
| 3 | 2041 | 1796160 | 37302 | 131092 | 3 | 2041 |

ಈ ಅವಳಿ ನಗರಗಳಿಗೆ ಕುಡಿಯುವ ನೀರು ಸರಬರಾಜನ್ನು ಈ ಕೆಳಕಂಡಂತೆ ಚಾಲ್ತಿಗೊಳಿಸಲಾಗಿದೆ.

1. ನೀರಸಾಗರ ಮತ್ತು ಮಲ್ಲಪ್ರಭ ಜಲಾಶಯಗಳಿಂದ ಮೊದಲನೇ ಮತ್ತು ಎರಡನೇ ಹಂತದ ನೀರು ಸರಬರಾಜು ಯೋಜನೆಗಳಡಿಯಲ್ಲಿ ಕಲ್ಪಿಸಿ 1993 ರಲ್ಲಿ ಚಾಲನೆಗೊಳಿಸಲಾಗಿದೆ;
2. ತುರ್ತು ನೀರು ಸರಬರಾಜು ಯೋಜನೆಯಡಿ ರೂ.63.48 ಕೋಟಿಗಳಲ್ಲಿ ಯೋಜನೆಗಳನ್ನು ಕೈಗೆತ್ತಿಗೊಂಡು ಚಾಲನೆಗೊಳಿಸಲಾಗಿದೆ;
3. ವಿಶ್ವಬ್ಯಾಂಕ್ ಯೋಜನೆಯಡಿ ರೂ.3852.00 ಲಕ್ಷಗಳಲ್ಲಿ ನೀರು ಸರಬರಾಜು ಅಭಿವೃದ್ಧಿಗೊಳಿಸುವ ಯೋಜನೆಯನ್ನು ಸಹ ಕೈಗೆತ್ತಿಕೊಂಡು ಜೂನ್ 2007ರಲ್ಲಿ ಪೂರ್ಣಗೊಳಿಸಲಾಗಿದೆ;
4. ನಗರಗಳ ವಿತರಣಾ ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸುವ ಉದ್ದೇಶದಿಂಧ ರೂ.5025.00 ಲಕ್ಷಗಳಲ್ಲಿ ಯೋಜನೆಯನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸಲಾಗಿದೆ;
5. ಈ ಅವಳಿ ನಗರಗಳ ಜೊತೆಯಲ್ಲಿ ಕುಂದಗೋಳ ಪಟ್ಟಣಕ್ಕೆ ಹಾಗೂ ಮಾರ್ಗ ಮಧ್ಯದ ಹಳ್ಳಿಗಳಿಗೆ ನೀರು ಸರಬರಾಜು ಮಾಡುವ ಉದ್ದೇಶದಿಂದ ಹಾಲಿ ಇದ್ದ 113.80 ಎಂ.ಎಲ್.ಡಿ ನೀರಿಗೆ 68 ಎಂ.ಎಲ್.ಡಿಗಳ ಹೆಚ್ಚುವರಿ ನೀರನ್ನು ಸರಬರಾಜು ಮಾಡುವ ಉದ್ದೇಶ ಹೊಂದಿ ರೂ.15200.00 ಲಕ್ಷಗಳಲ್ಲಿ ನೀರು ಸರಬರಾಜು ಯೋಜನೆಯನ್ನು ಮಂಜೂರು ಮಾಡಿ ಚಾಲನೆಗೊಳಿಸಲಾಗಿದೆ.
6. ಹುಬ್ಬಳ್ಳಿ–ಧಾರವಾಡ ನಗರಗಳಿಗೆ ನಿರಂತರ ನೀರು ಸರಬರಾಜು ಯೋಜನೆಯಡಿ (24/7) ಒಟ್ಟು 67 ವಾರ್ಡ್‌ಗಳ ಪೈಕಿ 8 ವಾರ್ಡ್‌ಗಳಿಗೆ (5 ಪೂರ್ಣ ಮತ್ತು 3 ಭಾಗಶಃ) ಪ್ರಾಯೋಗಿಕವಾಗಿ ನೀರು ಸರಬರಾಜು ಕಲ್ಪಿಸಲು ಕ್ವಾಸೀಪ್ ಯೋಜನೆಯಡಿ ಕೆ.ಯು.ಐ.ಡಿ.ಎಫ್.ಸಿ ಸಂಸ್ಥೆಯು ಕೈಗೆತ್ತಿಕೊಂಡು ಸದರಿ ಯೋಜನೆಯನ್ನು 2007 ಸಾಲಿನಲ್ಲಿ ಅನುಷ್ಠಾನಗೊಳಿಸಿರುತ್ತದೆ.
7. ಬಾಕಿ ಉಳಿದಂತಹ 59 ವಾರ್ಡ್‌ಗಳಿಗೆ ನಿರಂತರ ನೀರು ಸರಬರಾಜು ಯೋಜನೆಯನ್ನು ಕಲ್ಪಿಸುವ ಉದ್ದೇಶ ಹೊಂದಿ 2 ಹಂತಗಳಲ್ಲಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ಮೊದಲಿಗೆ 3 ಪೂರ್ಣ ಮತ್ತು 10 ಭಾಗಶಃ ವಾರ್ಡ್‌ಗಳಲ್ಲಿ ಅಗತ್ಯವಿರುವ ನೀರು ಸರಬರಾಜು ಅಭಿವೃದ್ಧಿ ಕಾರ್ಯಗಳನ್ನು ಈಗಾಗಲೇ ಅನುಮೋದಿತ ಯೋಜನೆಯಾದ ರೂ.15200.00 ಲಕ್ಷಗಳ ಅಂದಾಜಿನಲ್ಲಿ ಉಳಿತಾಯವಾದ ರೂ. 4290.00 ಲಕ್ಷಗಳ ಪೈಕಿ ರೂ.4250.00 ಲಕ್ಷಗಳ ಅಂದಾಜಿನಲ್ಲಿ ಕೈಗೆತ್ತಿಕೊಳ್ಳಲು ಉದ್ದೇಶಿಸಿ ಸರ್ಕಾರದ ಆದೇಶ ಸಂಖ್ಯೆ:ನಅಇ 14 ಯುಡಬ್ಲೂಎಸ್ 2012, ದಿನಾಂಕ:12–09–2012ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಮುಂದುವರೆದು ಪ್ರಸ್ತುತ 2ನೇ ಹಂತದಲ್ಲಿ ಮಂಡಳಿಯು ನೀರು ಸರಬರಾಜು ಜೋನ್‌ಗಳಾದ 1, 7, 8, 10, 17, 24 ಮತ್ತು 28 ಇವುಗಳಲ್ಲಿ 12 ಭಾಗಶಃ ವಾರ್ಡ್ ಸಂಖ್ಯೆ:31, 51, 52, 54, 55, 56, 66, 67, 4, 14, 15 ಮತ್ತು 22 ಮತ್ತು 5 ಪೂರ್ಣ ವಾರ್ಡ್ ಅಂದರೆ 5, 16, 19, 34 ಮತ್ತು 48 ಅಗತ್ಯವಿರುವ ನೀರು ಸರಬರಾಜು ಅಭಿವೃದ್ಧಿ ಕಾರ್ಯಗಳನ್ನು ವಿಶ್ವಬ್ಯಾಂಕ್ ನೆರವಿನ ಅಡಿಯಲ್ಲಿ ಕೆ.ಯು.ಐ.ಡಿ.ಎಫ್.ಸಿಯು ಕೈಗೆತ್ತಿಕೊಳ್ಳಲು ಉದ್ದೇಶಿಸಿರುವ ಪ್ರದೇಶಗಳ ಪೈಕಿ ಇವುಗಳನ್ನು ಹೊರತೆಗೆದು ಪ್ರತ್ಯೇಕವಾಗಿ ಈ ಯೋಜನೆಯಲ್ಲಿ ಸೇರಿಸಲು ಉದ್ದೇಶಿಸಲಾಗಿದೆ.

ಈ ಯೋಜನೆಯನ್ನು 2012–13ನೇ ಸಾಲಿನ ಮಂಡಳಿಯ ದರಪಟ್ಟಿಯನ್ವಯ ರೂ.7100.00 ಕೋಟಿಗಳ ಅಂದಾಜಿನಲ್ಲಿ ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ಉದ್ದೇಶಿಸಿ ವ್ಯವಸ್ಥಾಪಕ ನಿರ್ದೇಶಕರು ಕನನೀಸ ಮತ್ತು ಒಚ ಮಂಡಳಿ ರವರು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | | |
|---|---|---|
| 1. | ಸರ್ಕಾರದ ಅನುದಾನ (ಶೇ40%) | ರೂ. 2840.00 ಲಕ್ಷಗಳು |
| 2. | ಆರ್ಥಿಕ ಸಂಸ್ಥೆಗಳಿಂಧ ಸಾಲ (ಶೇ50%) | ರೂ. 3550.00 ಲಕ್ಷಗಳು |
| 3. | ಸ್ಥಳೀಯ ಸಂಸ್ಥೆಯ ವಂತಿಕೆ (ಶೇ10%) | ರೂ. 710.00 ಲಕ್ಷಗಳು |
| | **ಒಟ್ಟು** | **ರೂ. 7100.00 ಲಕ್ಷಗಳು** |

ಈ ಯೋಜನೆಯಡಿಯಲ್ಲಿ ನೀರು ಸರಬರಾಜು ವಿತರಣಾ ಜಾಲದ ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸಲು ಉದ್ದೇಶಿಸಿರುವ ಹಿನ್ನೆಲೆಯಲ್ಲಿ ಮೂಲ ಸ್ಥಾವರದಿಂದ ಈಗಾಗಲೇ ಪಡೆಯುತ್ತಿರುವ ನೀರಿನ ಪ್ರಮಾಣದಲ್ಲೆ ವಿತರಣಾ ವ್ಯವಸ್ಥೆ ಕಲ್ಪಿಸಲು ಅವಕಾಶ ಕಲ್ಪಿಸಿರುವುದರಿಂದ ಜಲಸಂಪನ್ಮೂಲ ಇಲಾಖೆಯ ಸಹಮತಿ ಅಗತ್ಯವಿರುವುದಿಲ್ಲ.

ಆರ್ಥಿಕ ಇಲಾಖೆಯ ಯೋಜನೆಯಡಿ ಆರ್ಥಿಕ ಮಾದರಿಯಂತೆ ಸರ್ಕಾರದ ಅನುದಾನವಾದ ರೂ.28.40 ಕೋಟಿಗಳ ಮೊತ್ತವನ್ನು ಅಂದರೆ ಶೇ.40ರಷ್ಟು ಮೊತ್ತವನ್ನು ಭರಿಸುವ ಕುರಿತಂತೆ ಮತ್ತು ಯೋಜನೆಯ ಅನುಷ್ಠಾನಕ್ಕೆ ಹೆಚ್ಚುವರಿಯಾಗಿ ಈ ಮೊತ್ತವನ್ನು ಬಿಡುಗಡೆ ಮಾಡುವ ಕುರಿತಂತೆ ಯಾವುದೇ ಅಭಿಪ್ರಾಯವನ್ನು ನೀಡಿರುವುದಿಲ್ಲ.

ಈ ಯೋಜನೆಯಡಿ ಸರ್ಕಾರದ ಅನುದಾನವಲ್ಲದೆ ಆರ್ಥಿಕ ಸಂಸ್ಥೆಗಳಿಂದ ಸಾಲದ ರೂಪದಲ್ಲಿ ಶೇ.50 ರಷ್ಟು ಮೊತ್ತವನ್ನು ರೂ.35.50 ಕೋಟಿಗಳನ್ನು ಪಡೆಯಲು ಮತ್ತು ತನ್ನ ಪಾಲಿನ ಮೊತ್ತವಾದ ಶೇ.10 ರಷ್ಟು ಅಂದರೆ ರೂ.7.10 ಕೋಟಿಗಳನ್ನು ಸ್ಥಳೀಯ ಸಂಸ್ಥೆಯು ಭರಿಸಲು ಒಪ್ಪಿ ಠರಾವು ಪಾಸು ಮಾಡಿರುವುದರಿಂದ ಈ ಯೋಜನೆಗೆ ಸರ್ಕಾರದಿಂದ ಬಿಡುಗಡೆ ಮಾಡಿರಬೇಕಾಗಿರುವ ರೂ.28.40 ಕೋಟಿಗಳನ್ನು ಆರ್ಥಿಕ ಇಲಾಖೆಯು ಮಂಡಳಿಗೆ ಹೆಚ್ಚುವರಿಯಾಗಿ ಅನುದಾನ ಒದಗಿಸುವ ಅಗತ್ಯ ಇರುತ್ತದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 02 ಯುಡಬ್ಲ್ಯೂಎಸ್ 2012, ಬೆಂಗಳೂರು, ದಿನಾಂಕ: 08–10–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯ ಯೋಜನೆಯಡಿ ಸರ್ಕಾರದ ಅನುದಾನ ಮೊತ್ತವಾದ ರೂ.28.40ಕೋಟಿಗಳ ಮೊತ್ತವನ್ನು ಹೆಚ್ಚುವರಿಯಾಗಿ ಮಂಡಳಿಗೆ ಬಿಡುಗಡೆ ಮಾಡುವ ಷರತ್ತಿಗೊಳಪಡಿಸಿ ಹುಬ್ಬಳ್ಳಿ–ಧಾರವಾಡ ಅವಳಿ ನಗರಗಳ ಒಟ್ಟು 5 ಪೂರ್ಣ, 12 ಭಾಗಶಃ ವಾರ್ಡ್‌ಗಳಿಗೆ 24/7 ನಿರಂತರ ನೀರು ಸರಬರಾಜು ಯೋಜನೆಯ ವ್ಯವಸ್ಥೆಯನ್ನು ಅಂದಾಜು ರೂ.7100.00 ಲಕ್ಷಗಳಲ್ಲಿ (ರೂ.ಏಳು ಸಾವಿರದ ನೂರು ಲಕ್ಷಗಳು ಮಾತ್ರ) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1) The board shall invite the tender immediately after the handing over of the land required if any under the scheme in order to avoid time and cost run over;

2) Adequate provision to be made by the Board in the following years for timely completion of the project;

3) Water rates as proposed by KUWS & DB have to be implemented to meet O & M cost;

4) KTPP provisions, quality control and timely completion should ensured;

5) A comprehensive resolution is obtained from the HDMC to ensure agreement on good management practices like universal metering, volumetric tariff of the levels required at least for O & M viablility, removal of public stand-posts, scientific management of new connections etc.,

6) Choice of contracting methodology is brought up for a decision separately working out pros and cons of various options-performance based contact, item rate or turnkey contract.

7) Performance parameters and accountability norms are finalized and disclosed upfront;

8) Impact of this proposal on KUWASIP up scaling project is studied and how will it be managed and coordinated is clearly brought out.

9) The Board should identify and implement institutional reforms in the Board to create some capacity in them to manage such contracts.

10) The Board shall move to the finance department for the additional grant of Rs.28.40 crores, required for the scheme as per its funding pattern, in additional to the budget provisions made during year 2012-13, and initiate progress of the work thereafter:

11) ಮಂಡಳಿಯು 24/7 ನಿರಂತರ ನೀರು ಸರಬರಾಜು ಯೋಜನೆಯನ್ನು 2 ಹಂತಗಳಲ್ಲಿ ಕೈಗೆತ್ತಿಕೊಳ್ಳುವ ಮುನ್ನ ಈಗಾಗಲೇ ವಿಶ್ವ ಬ್ಯಾಂಕ್ ನೆರವಿನ ಕ್ವಾಸಿಪ್ ಯೋಜನೆಯಡಿಯಲ್ಲಿ ಉದ್ದೇಶಿಸಿರುವ ಸದರಿ ವಾರ್ಡ್‌ಗಳನ್ನು ಹೊರತು ಪಡಿಸಲು ಕ್ರಮ ವಹಿಸುವುದು, ಮತ್ತು ಈ ಬಗ್ಗೆ ಸಂಬಂಧಪಟ್ಟ ಇಲಾಖೆಯೊಂದಿಗೆ ವ್ಯವಹರಿಸಿ ಸರ್ಕಾರಕ್ಕೆ ವರದಿ ನೀಡತಕ್ಕದ್ದು.

12) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದಲ್ಲ;

13) ಸದರಿ ಕಾಮಗಾರಿಯನ್ನು ನಿಗದಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: FD 466 Exp–9:2012, ದಿನಾಂಕ: 05–09–2012 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ.ವಾಸುದೇವರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**P.R. 143**